ವಿದ್ಯಾರ್ಥಿ ವಾಣಿ

Voices of Students

# ಗೆಳೆಯರಿಂದ ಗುಜರಾತಿ ಕಲಿತು ಶಾಲೆಯಲ್ಲಿ ಮರಾಠಿ ಕಲಿಯದೇ ಹೋದದ್ದು

Learning Gujarati from Friends; Not learning Marathi at School

ರಂಜನಿ ರಾಘವನ್

ನಾನು ಮುಂಬೈನಲ್ಲಿ ಹುಟ್ಟಿ ಬೆಳೆದ ತಮಿಳಿಗಳು . ನನಗೆ ಮೂರು ವರ್ಷವಿದ್ದಾಗಲೇ ಹಿಂದಿ, ಇಂಗ್ಲಿಷ್ ಮತ್ತು ತಮಿಳು ಬರೆಯಲು ಬರುತ್ತಿತ್ತು . ನನಗೆ ಗುಜರಾತಿ ಗೆಳೆಯರು ಇದ್ದುದರಿಂದ ಗುಜರಾತಿಯನ್ನೂ ಮಾತಾಡಲು ಶುರು ಮಾಡಿದೆ! ಹೊಸ ಭಾಷೆಯೊಂದನ್ನು ನಾನು ಅತ್ಯಂತ ಸಹಜವಾಗಿ ಮಾತಾಡಲು ಕಲಿತೆ ! ಆದರೆ ಈಗಲೂ ನನಗೆ ಶಾಲೆಯಲ್ಲಿ ೬ ವರ್ಷಗಳ ಕಾಲ ಅಭ್ಯಾಸ ಮಾಡಿಯೂ ಮರಾಠಿ ಭಾಷೆಯಲ್ಲಿ ಮಾತ್ರ ಐದು ನಿಮಿಷಕ್ಕಿಂತ ಹೆಚ್ಚು ಮಾತಾಡಲು ಆಗುವುದಿಲ್ಲ.

ಭಾಷೆಯನ್ನು ಕಲಿಸುವ ಪ್ರಕ್ರಿಯೆಯು ಸಾಧಾರಣವಾಗಿ ಅಕ್ಷರಮಾಲೆಯಿಂದ ಶುರುವಾಗುತ್ತದೆ - ಆದರೆ ಮರಾಠಿ ಕಲಿಯಲು ಇದರ ಅಗತ್ಯವಿರಲಿಲ್ಲ ಏಕೆಂದರೆ ಅದರ ಲಿಪಿ ಹಿಂದಿಯದ್ದೇ . ಆದ್ದರಿಂದ ನಾವು ಒಂದೇ ಸಲಕ್ಕೆ ಪಠ್ಯಪುಸ್ತಕಗಳನ್ನು ಅಭ್ಯಾಸ ಮಾಡಲು ಶುರುಮಾಡಿದೆವು . ಪಾಠಗಳನ್ನು ಇಂಗ್ಲೀಷ್ ಗೆ ಭಾಷಾಂತರಿಸಲಾಗುತ್ತದೆ ಹಾಗು ಪಾಠಕ್ಕೆ ಸಂಬಂಧಿಸಿದ ಪ್ರಶ್ನೆಗಳನ್ನು ಮೊದಲೇ ತಿಳಿಸಲಾಗುತ್ತದೆ - ಮಕ್ಕಳು ಉತ್ತರವನ್ನು ಬಾಯಿಪಾಠ ಮಾಡಿದರಾಯಿತು . ಅದೇ ಪ್ರಶ್ನೆಗಳು ಪರೀಕ್ಷೆಯಲ್ಲಿ ಬರುತ್ತವೆ ; ಅದಕ್ಕೆ ಉತ್ತರ ಬರೆದು ವಿದ್ಯಾರ್ಥಿಗಳು ತೇರ್ಗಡೆ ಹೊಂದುತ್ತಾರೆ .

ಇದು ಹತ್ತನೇ ತರಗತಿಯವರೆಗೂ ಮುಂದುವರೆಯುತ್ತದೆ . ಈ ಪ್ರಕ್ರಿಯೆಯಲ್ಲಿ ವಿದ್ಯಾರ್ಥಿಗೆ ಮೂಲ ಭಾಷೆ ಅರ್ಥವಾಗುತ್ತದೆ ಆದರೆ ವ್ಯಾಕರಣಬದ್ಧವಾದ ವಾಕ್ಯಗಳನ್ನು ರಚಿಸಲು ಬರುವುದಿಲ್ಲ. ಪ್ರಬಂಧ ಹಾಗು ಪತ್ರಗಳ ವಿಷಯ ಬಂದಾಗಲಂತೂ ಮನದೊಳಗಿನ ಯೋಚನೆ ಹಾಗೂ ಕಲ್ಪನೆಗಳನ್ನು ಮರಾಠಿಯಲ್ಲಿ ಹಾಳೆಗೆ ಇಳಿಸಲು ವಿದ್ಯಾರ್ಥಿಗಳು ಬಹಳ ಕಷ್ಟಪಡುತ್ತಾರೆ. ಈ ಒಂದು ಕೌಶಲ್ಯಕ್ಕಾಗಿ ನಮ್ಮನ್ನು ತಯಾರೇ ಮಾಡಲಾಗಿಲ್ಲ. ಐದರಿಂದ ಹತ್ತು ಪ್ರತಿಶತಕ್ಕೂ ಕಮ್ಮಿ ವಿದ್ಯಾರ್ಥಿಗಳು ಸೃಜನಾತ್ಮಕ ಬರವಣಿಗೆಯಲ್ಲಿ ಹಿಡಿತ ಸಾಧಿಸುತ್ತಾರೆ

ಪಠ್ಯಕ್ರಮದ ಉಪದ್ರವದೊಳಗೆ ಭಾಷೆಯನ್ನು ಕಲಿಯುವ ಹೊರೆಯನ್ನು ಊಹಿಸಲೂ ಆಗದು . ೨೫ಕ್ಕೂ ಹೆಚ್ಚು ಪಾಠಗಳು, ಪದ್ಯಗಳು (ನಿಜವಾಗಿಯೂ!) ಮತ್ತು ೧೦೦ಅಂಕದ ಪತ್ರಿಕೆಗೆ ೧೦೦ಕ್ಕೂ ಹೆಚ್ಚು "ಗಟ್ಟು ಹೊಡೆಯಬೇಕಾದ" ಉತ್ತರಗಳು. ಸಾಲದೆಂದು ನೀರಸವಾದ ಕಥೆಗಳು ಹಾಗೂ ಪಾಠಗಳು ಬೇರೆ. ಆದರೂ ಒಬ್ಬ ವಿದ್ಯಾರ್ಥಿಯು ಚೆನ್ನಾಗಿ ಗಟ್ಟು ಹೊಡೆದು ೬೫ ಅಂಕಗಳಷ್ಟು ಪಡೆದುಬಿಡಬಹುದು . ಇದರಲ್ಲಿ ಭಾಷಾ ಕಲಿಕೆಯೇನೂ ಇಲ್ಲ . ೧೦ನೇ ತರಗತಿಯ ನಂತರ ನೆಮ್ಮದಿಯುಂಟಾಗುತ್ತದೆ ಏಕೆಂದರೆ ಅದರ ನಂತರ ವಿಷಯವನ್ನು ಓದುವುದು ಕಡ್ಡಾಯವಲ್ಲ!

ಈ ಸಮಸ್ಯೆಯನ್ನು ಬಗೆಹರಿಸುವ ಒಂದೇ ಮಾರ್ಗವೆಂದರೆ ಬೋಧನಾ ಕ್ರಮವನ್ನೇ ಬದಲಿಸುವುದು . ಶಿಕ್ಷಕರಿಗೇ ಭಾಷಾ ಪ್ರೇಮದ ಅಗತ್ಯವಿದೆ. ಬಲವಂತದಿಂದ ಯಾವುದೇ ಭಾಷೆಯನ್ನೂ ಕಲಿಯಲು ಸಾಧ್ಯವಿಲ್ಲ. ಶುರುವಿನಲ್ಲಿ ಮಾತಾಡುವ ಮತ್ತು ಕೇಳುವ ಕಲೆಗಷ್ಟೇ ಒತ್ತು ಕೊಟ್ಟು ಕೊಟ್ಟು ಓದುವ ಮತ್ತು ಬರೆಯುವ ಕೌಶಲ್ಯಕ್ಕೆ ಮುಂದಾಗಬೇಕು. ಪಠ್ಯ ಆಧಾರಿತ ಪರೀಕ್ಷೆಗಳನ್ನು ಕೈಬಿಡುವುದು ಒಳ್ಳೆಯದು. ಶ್ರವಣ ಪಾಠಗಳನ್ನು ಆಧಾರಿಸಿ ಇನ್ನು ಹೆಚ್ಚಿನ ಗೃಹಿಕೆಯ ಅಭ್ಯಾಸಗಳು , ಸಂಯೋಜನೆಗಳು ಹಾಗು ಪರೀಕ್ಷೆಗಳು ಬರಬೇಕು . ಇದರಿಂದ ಕೊನೆಯ ಪಕ್ಷ ವಿದ್ಯಾರ್ಥಿಗಳು ಶಾಲೆಯನ್ನು ಮುಗಿಸುವ ವೇಳೆಗಾದರೂ ಭಾಷೆಯ ಮೇಲೆ ಒಂದು ಮಟ್ಟಿಗಿನ ಹಿಡಿತ ಸಾಧಿಸಿ ಅದರಲ್ಲಿ

ಚೆನ್ನಾಗಿ ವ್ಯವಹರಿಸಲು ಕಲಿಯುತ್ತಾರೆ. ನಾನು ಶಾಲೆಯಿಂದ ಹೊರಗೆ ನನ್ನ ಗೆಳೆಯರ ಜೊತೆಗೂಡಿ ಗುಜರಾತಿ ಕಲಿತ ಸಂಗತಿಯಲ್ಲಿ ಶಿಕ್ಷಣ ವ್ಯವಸ್ಥೆಗೆ ಒಂದು ಪಾಠ ಅಡಕವಾಗಿಲ್ಲವೇ ?

ರಂಜನಿ ರಾಘವನ್ ಅವರು ಮುಂಬೈನ ಎಂ ಎಲ್ ಡಹಾನುಕರ್ ವಾಣಿಜ್ಯ ಕಾಲೇಜಿನಲ್ಲಿ ದ್ವಿತೀಯ ಪಿ . ಯು. ಸಿ ವ್ಯಾಸಂಗ ಮಾಡುತ್ತಾ ಇದ್ದಾರೆ. ಅವರನ್ನು ನೀವು ಈ ಮಿಂಚಂಚೆಯ ಮೂಲಕ ಸಂಪರ್ಕಿಸಬಹುದು – ranjani2011@yahoo.co.in